ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ಸಣ್ಣ ನೀರಾವರಿ ಇಲಾಖೆ ಯೋಜನೆಗಳು ಹಾಗೂ ಟೆಂಡರ್ ಪ್ರಕ್ರಿಯೆ ಬಗ್ಗೆ

ಶ್ರೀಕವಟಗಿಮಠ ಮಹಾಂತೇಶ್ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

747 (1024) ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) 2019-20ರಲ್ಲಿ ಸಣ್ಣ ನೀರಾವರಿ ಇಲಾಖೆಯಲ್ಲಿ ಕೈಗೆತ್ತಿಕೊಂಡ ಯೋಜನೆಗಳೆಷ್ಟು ; ಇದಕ್ಕಾಗಿ ನಿಗದಿಪಡಿಸಿರುವ ಒಟ್ಟಾರೆ ಹಣವೆಷ್ಟು; (ವಿವರ ನೀಡುವುದು)

(ಆ) 2019-20ರಲ್ಲಿ ಸಣ್ಣ ನೀರಾವರಿ ಇಲಾಖೆಯ ಯಾವುದಾದರೂ ಯೋಜನೆಗೆ ನಿಗದಿತ ಮೌಲ್ಯಕ್ಕಿಂತ ಕಡಿಮೆ ದರಕ್ಕೆ ಟೆಂಡರ್ ನೀಡಲಾಗಿದೆಯೇ ; ನೀಡಿದ್ದಲ್ಲಿ, ಟೆಂಡರ್ನ ಸಂಪೂರ್ಣ ಮಾಹಿತಿ ನೀಡುವುದು ;

(ಇ) 2017-18, 2018-19, 2019-20ರಲ್ಲಿ ಕೈಗೊಂಡ ಯೋಜನೆಗಳ ಪೈಕಿ ಯಾವುದಾದರೂ ಸಣ್ಣ ನೀರಾವರಿ ಯೋಜನೆಗೆ ನಿಗದಿತ ದರಕ್ಕಿಂತ ಕಡಿಮೆ ಮೌಲ್ಯಕ್ಕೆ ಟೆಂಡರ್ ನೀಡಲಾಗಿದೆಯೇ; ಹಾಗಿದ್ದರೆ, ಯಾವುದು ; (ವಿವರ ನೀಡುವುದು)

(ಈ) ನಿಗದಿತ ಮೌಲ್ಯಕ್ಕಿಂತ ಕಡಿಮೆಗೆ ಟೆಂಡರ್ ಹಾಕಿ ಅನಂತರ ಆ ರೀತಿಯ ಯೋಜನೆಗಳ ವೆಚ್ಚ ಹೆಚ್ಚಿರುವ ಉದಾಹರಣೆಗಳಿವೆಯೇ? (ಇದ್ದರೆ ವಿವರ ನೀಡುವುದು)